# ಶಿಕ್ಷಣದೆಡೆಗಿನ ಬದ್ಧತೆ : ನಾವು ಸೋಲುತ್ತಿದ್ದೇವೆಯೇ?

-ಹೃದಯಕಾಂತ ದಿವಾನ್

ಭಾರತದ ಸಂವಿಧಾನದಲ್ಲಿ ಮಾಡಲಾಗಿರುವ ಪ್ರಮಾಣಗಳು

ಸ್ವಾತಂತ್ರ್ಯ, ಸಮಾನ ಅವಕಾಶ, ಕರ್ತೃತ್ವ ಮತ್ತು ನ್ಯಾಯಬದ್ಧತೆ ಇವುಗಳೇ ಪ್ರಜಾಸತ್ತಾತ್ಮಕ ದೇಶವೊಂದರ ಪರಿಕಲ್ಪನೆಯ ಆಧಾರ ಮತ್ತು ಗುರಿ. ಇದು ರೂಪುಗೊಳ್ಳಲು ಎಲ್ಲ ಪ್ರಜೆಗಳ ಭಾಗವಹಿಸುವಿಕೆ ಮುಖ್ಯ. ಬೇರೆ ಬೇರೆ ರೀತಿಗಳಲ್ಲಿ ಈ ಪರಿಕಲ್ಪನೆಯನ್ನು ಹೇಳಲಾಗಿದೆ. ಎಲ್ಲಕ್ಕಿಂತ ಪರಿಣಾಮಕಾರಿಯಾಗಿ ಭಾರತೀಯ ಸಂವಿಧಾನದ ಪೀಠಿಕೆಯಲ್ಲಿ ವ್ಯಕ್ತಪಡಿಸಲಾಗಿದೆ. ಇದು ಪ್ರತಿ ವ್ಯಕ್ತಿಗೂ ಸಮಾನ ಹಕ್ಕುಗಳು ಮತ್ತು ಸಮಾನ ಅವಕಾಶಗಳನ್ನು ನೀಡುವ ಒಂದು ಒಕ್ಕೂಟವಾಗುವುದಾಗಿ ಭಾರತದ ಜನರೇ ಒಟ್ಟಾಗಿ ಘೋಷಿಸಿರುವುದು.

ಸಂವಿಧಾನದ ಪೀಠಿಕೆಯಲ್ಲಿ ಮುಖ್ಯ ಪದಗಳೆಂದರೆ ನ್ಯಾಯ, ಸ್ವಾತಂತ್ರ್ಯ, ಸಮಾನ ಸ್ಥಾನಮಾನ, ಅವಕಾಶ ಮತ್ತು ಭ್ರಾತೃತ್ವ. ಇದರಿಂದ ಸ್ಪಷ್ಟವಾಗುವುದು ಏನೆಂದರೆ ಈ ಪದಗಳ ಅರ್ಥವನ್ನು ಅರಿತುಕೊಂಡು ಪ್ರತಿಯೊಬ್ಬ ನಾಗರಿಕನೂ ಮತ್ತೊಬ್ಬ ನಾಗರಿಕನಿಗೆ ಬೆಂಬಲವಾಗಿ ನಿಲ್ಲಬೇಕು. ಸರ್ಕಾರಿ ವ್ಯವಸ್ಥೆಯು ಕೂಡ ಪ್ರತಿಯೊಬ್ಬರಿಗೂ ಇದನ್ನು ಅರ್ಥಮಾಡಿಸಲು, ಈ ಕುರಿತು ತಿಳಿವಳಿಕೆ ನೀಡಲು ಮತ್ತು ಈ ಗುರಿಯನ್ನು ಸಾಧಿಸಲು ಶ್ರಮಿಸಬೇಕೆಂದು ನಿರೀಕ್ಷಿಸುತ್ತದೆ. ನಾವು ಪೀಠಿಕೆಯಲ್ಲಿ ಹೇಳಿರುವಂತೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ ಹಾಗೂ ಸಮಾನ ಸ್ಥಾನಮಾನ, ಅವಕಾಶಗಳಿಗೆ ಬದ್ಧರಾಗಿದ್ದೇವೆ. ಈ ವಾಗ್ದಾನವು ಜಾತಿ ಆಧಾರಿತ, ಲಿಂಗಾಧಾರಿತ, ಸಾಂಸ್ಕೃತಿಕ ವೈವಿಧ್ಯ, ಆರ್ಥಿಕವಾಗಿ ಹೆಚ್ಚು ಶ್ರೇಣಿಕೃತವಾದ, ರಾಜಕೀಯವಾಗಿ ವಿಭಜಿತವಾದ ಅಸಮಾನ ಸಮಾಜವೊಂದರ ದೂರದೃಷ್ಟಿಯ ಫಲ. ಪೀಠಿಕೆಯಲ್ಲಿ ಪ್ರತಿಪಾದಿಸಲಾಗಿರುವ ಕಲ್ಪನೆಗಳ ಅನುಷ್ಠಾನಕ್ಕೆ ಬೇಕಾದ ದೃಷ್ಟಿಕೋನವನ್ನೂ ಅದರ ಅರ್ಥವನ್ನೂ ಹಾಗೂ ಅದರ ಪರಿಣಾಮವನ್ನು ಅರಿಯಲು ಮತ್ತು ಪ್ರಜೆಗಳು ಇದನ್ನು ಆಗುಮಾಡುವುದಕ್ಕೆ ಬೇಕಾದ ಸಾಮರ್ಥ್ಯವನ್ನು ತುಂಬಲು ಸಾಧ್ಯವಾಗುವುದು ಶಿಕ್ಷಣದಿಂದ ಮಾತ್ರ.

ಕಾನೂನಿನ ಮೂಲಕ ಜಾರಿಗೊಳಿಸಬಹುದಾದ ಶಿಕ್ಷೆಯ ಹೊರತಾಗಿ, ಎಲ್ಲರನ್ನೂ ಸಮಾನವಾಗಿ ಹಾಗೂ ಗೌರವದಿಂದ ಕಾಣುವಂತೆ ಮಾಡುವ ಮಾರ್ಗವೆಂದರೆ, ಪ್ರಜೆಗಳೆಲ್ಲರೂ ಈ ನಿಯಮಗಳನ್ನು ಅರಿತು ಅದರಿಂದ ಗುರಿಯನ್ನು ಸಾಧಿಸುವ ಮಹತ್ವಾಕಾಂಕ್ಷೆಯನ್ನು ಹೊಂದುವಂತೆ ಪ್ರೇರೇಪಿಸುವುದು.

ಇದಕ್ಕೆ ಮೊದಲು ಬೇಕಾದದ್ದು ಅವಕಾಶಗಳ ತಿಳಿವಳಿಕೆ ಹಾಗೂ ತಾನು ಆಯ್ಕೆ ಮಾಡಿಕೊಂಡದ್ದನ್ನು ಸಾಧಿಸಬಲ್ಲೆನೆಂಬ ನಂಬಿಕೆ. ಇದು ಹಕ್ಕು ಅಥವಾ ಸಾಧಿಸುವ ಸಾಮರ್ಥ್ಯವನ್ನು ಆಧರಿಸಿರುತ್ತದೆ. ಅಮಾರ್ತ್ಯ ಸೇನ್ ಮತ್ತಿತರು ಹೇಳುವಂತೆ ನಿಜವಾದ ಸ್ವಾತಂತ್ರ್ಯ ಎನ್ನುವುದು ಆಯ್ಕೆಯ ಅವಕಾಶದಲ್ಲಿದೆ. ಇದು ಬೆಳೆಯುವ ಸ್ವಾತಂತ್ರ್ಯವನ್ನು ನೀಡಿ ಅದರಿಂದ ಸಾಮರ್ಥ್ಯಗಳ ಬೆಳವಣಿಗೆಯಾಗಿ ಅದರಿಂದ ಸಂಸ್ಥೆ ಹಾಗೂ ಸಮಾನತೆಯ ಅರಿವು ಮೂಡುತ್ತದೆ. ಈ ನಿಟ್ಟಿನಲ್ಲಿ ನಾವೆಷ್ಟು ದೂರವನ್ನು ಕ್ರಮಿಸಿದ್ದೇವೆ?

ಸಂವಿಧಾನದಲ್ಲಿನ ಬದ್ಧತೆಗಳನ್ನು ಮೂಲಭೂತ ಹಕ್ಕುಗಳು ಮತ್ತು ನೀತಿ ನಿರ್ದೇಶನ ತತ್ವಗಳು ಎಂದು ವಿಭಾಗಿಸಲಾಗಿದೆ. ಈ ಎರಡೂ ದಿಕ್ಕಿನಲ್ಲೂ ಪ್ರಗತಿ ಕುಂಠಿತಗೊಂಡಿದ್ದು ಇದರಲ್ಲಿ ಶಿಕ್ಷಣವನ್ನು ಮೂಲಭೂತ ಹಕ್ಕಾಗಿ ಗಣಿಸಿಲ್ಲ. ಇದರೊಟ್ಟಿಗೆ ನಾವು ಗಮನಿಸಬೇಕಾದದ್ದು ನಮಗೆ ಮೂಲಭೂತ ಹಕ್ಕುಗಳು ಎಂದು ನೀಡಲಾಗಿರುವುದನ್ನು ನಾವಿನ್ನೂ ಸಾಧಿಸಿಲ್ಲ. ಜಾತಿ, ವರ್ಗ ಮತ್ತು ಲಿಂಗ ಸಮಾನತೆಯಿಲ್ಲ. ಶೋಷಣೆಯಿಂದ ಮುಕ್ತಿ ನೀಡುವ ಅಥವಾ ಧರ್ಮವನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ನೀಡುವ ಬಗ್ಗೆಯೂ ಖಾತರಿ ಇಲ್ಲ. ಇಂದಿನ ಸನ್ನಿವೇಶದಲ್ಲಿ ನಡೆಯುವ ಸಂವಾದಗಳೂ ಕಲಹಗಳಿಂದ ಕೂಡಿರುತ್ತವೆ ಹಾಗೂ ಸಾಮಾನ್ಯ ಸಂದರ್ಭಗಳಲ್ಲೂ ಪ್ರಜೆಗಳ ನಡುವೆ ತಾರತಮ್ಯ ಮಾಡಲಾಗುತ್ತಿದೆ.

ಅಸ್ಪೃಶ್ಯರು, ಅಲ್ಪಸಂಖ್ಯಾತರು ಅದರಲ್ಲೂ ಮುಸ್ಲಿಮರು, ಬುಡಕಟ್ಟು ಜನಾಂಗದವರು ಹಾಗೂ ಮತ್ತಿತರ ವರ್ಗಗಳವರು ಕಡಿಮೆ ಸವಲತ್ತುಗಳನ್ನು ಹೊಂದಿದ್ದು ಅವರುಗಳನ್ನು ಅಂಚಿಗೆ ಸರಿಸಲಾಗಿದೆ ಹಾಗೂ ಮೂಲಭೂತ ಸ್ವಾತಂತ್ರ್ಯಗಳಾದ ಬದುಕು, ಉದ್ಯೋಗ ಹಾಗೂ ಆಹಾರಕ್ರಮಗಳನ್ನೂ ನಿಯಂತ್ರಿಸಿಲಾಗಿದೆ. ಮತ್ತೊಬ್ಬ ವ್ಯಕ್ತಿಯ ಮೇಲೆ ಅವರ ನೆರಳು ಬಿದ್ದ ಮಾತ್ರಕ್ಕೆ ಅವರನ್ನು ಶಿಕ್ಷಿಸಲಾಗುತ್ತದೆ. ಎಲ್ಲರೊಂದಿಗೆ ಸಮಾನವಾಗಿ ಕೂರುವಂತಿಲ್ಲ, ಉಣ್ಣುವಂತಿಲ್ಲ, ಇತರರೊಡನೆ ಬೆರೆಯುವಂತಿಲ್ಲ ಮತ್ತು ಕೆಲವರಿಗೆ ಪರದೇಶದಲ್ಲಿ ಹೋಗಿ ನೆಲೆಸಲು ಹೇಳಲಾಗುತ್ತಿದೆ. ಈ ಸಮುದಾಯಗಳವರು ಮೇಲ್ಜಾತಿಯ ವ್ಯಕ್ತಿಯೊಂದಿಗೆ ಬೆರೆತಲ್ಲಿ ಅಥವಾ ಅವರೊಂದಿಗೆ ಸಂಬಂಧ ಬೆಳೆಸಿದಲ್ಲಿ ಅದೊಂದು ಅಪರಾಧವಾಗಿ ಆ ವ್ಯಕ್ತಿಯ ಕುಟುಂಬದ ಮೇಲೆ ಹಲ್ಲೆಗಳಾಗಿ ಅವರ ಮೇಲೆ ದೌರ್ಜನ್ಯವೆಸಗಿ ಅವರನ್ನು ಮನೆಯಿಂದ ಹೊರಹಾಕಲಾಗುತ್ತದೆ.

ಗಂಡಸರಿಗಿಂತ ಹೆಂಗಸರು ಕಡಿಮೆ ಆದಾಯ ಗಳಿಸುತ್ತಿರುವುದು, ಆಸ್ತಿಯ ಮೇಲೆ ಹಕ್ಕು ಹೊಂದಿಲ್ಲದಿರುವುದು ಅಥವ ಮಕ್ಕಳಿಗೆ ತಾಯಿಯ ಹೆಸರಿನ ಅಗತ್ಯವಿಲ್ಲದಿರುವುದು ಇವೆಲ್ಲವೂ ಕಣ್ಣಿಗೆ ಕುಕ್ಕವಂತಹ ಲಿಂಗ ಅಸಮಾನತೆಯ ವಿಷಯಗಳು. ನಿಗದಿತ ಶೈಲಿಯಲ್ಲಿ ಬಟ್ಟೆಗಳನ್ನು ಧರಿಸುವುದು ಮಾತ್ರ ಈ ಕಟ್ಟಳೇಗೆ ಬದ್ಧವಾದಂತೆ ಹಾಗೂ ಇದನ್ನು ಉಲ್ಲಂಘಿಸಿದಲ್ಲಿ ಅನಗತ್ಯ ಲೈಂಗಿಕ ದೌರ್ಜನ್ಯಗಳು, ದಾಳಿಗಳಿಗೂ ಎಡೆಮಾಡಿಕೊಡುತ್ತದೆ. ಈ ಹಕ್ಕುಗಳನ್ನು ಹಾಗೂ

ಇನ್ನಿತರೆ ಹಕ್ಕುಗಳನ್ನೂ ಕಾನೂನು ಜಾರಿ ಮಾಡುವ ಯಾವುದೇ ಸಂಸ್ಥೆಯೂ ನೀಡಲಾರದು. ನಾವು ಮುಂದುವರೆದಿರುವುದು ನಿಜವಾದರೂ ಎಲ್ಲ ಪ್ರಜೆಗಳಿಗೂ ಇದನ್ನು ಒದಗಿಸುವ ನಿಟ್ಟಿನಲ್ಲಿ ಇನ್ನೂ ಬಹು ದೂರವಿದ್ದೇವೆ. ಸಾಂವಿಧಾನಿಕ ಪರಿಹಾರಗಳ ಹಕ್ಕು (ನೀತಿ ನಿರ್ದೇಶನ ತತ್ವಗಳ ಅನುಷ್ಠಾನದ ವಿಷಯವಂತೂ ದೂರವೇ ಉಳಿಯಿತು) ಪ್ರತಿಪಾದಿಸಲು ಅಂದರೆ ಯಾವುದೇ ಅಹವಾಲನ್ನು ಪ್ರತಿಪಾದಿಸುವ ಅಥವಾ ನ್ಯಾಯಾಲಯದ ಮುಂದೆ ಪ್ರಕರಣವನ್ನು ಸಲ್ಲಿಸುವ ಮೊದಲು ನಾಗರೀಕರು ತಮ್ಮ ಹಕ್ಕನ್ನು ತಿಳಿದಿರಬೇಕಿರುತ್ತದೆ.

ಸಂವಿಧಾನ ರಚನಾ ಸಭೆಯಲ್ಲಿ ಶಿಕ್ಷಣವನ್ನು ಮೂಲಭೂತ ಹಕ್ಕಾಗಿ ನೀಡುವ ವಾದವನ್ನು ಒಪ್ಪಲಿಲ್ಲವಾದ್ದರಿಂದ ನಿರ್ದೇಶಿತ ತತ್ವವಾಗಿ ಉಳಿಸಲಾಯಿತು. ಸಮಾನ ಶಿಕ್ಷಣವು ಪ್ರಜಾಪ್ರಭುತ್ವದ ಮೂಲಾಧಾರವಾಗಿದ್ದರೂ ಅದನ್ನು ಅಂಗೀಕರಿಸಲಿಲ್ಲ. ಅನೇಕ ಬದ್ಧತೆಗಳ ಹೊರತಾಗಿಯೂ ಶಿಕ್ಷಣವು ಸಾರ್ವತ್ರಿಕವಾಗಿ ದಕ್ಕಬೇಕು ಎಂಬ ಯತ್ನವು ಆದ್ಯತೆಯನ್ನು ಪಡೆಯದೇ ಆರ್ಥಿಕ ಬೆಳವಣಿಗೆ, ಆಂತರಿಕ ಭದ್ರತೆ ಮತ್ತು ಬಾಹ್ಯ ರಕ್ಷಣೆ ಇವುಗಳ ನಡುವೆ ಹಿನ್ನಲೆಗೆ ಸರಿದುಹೋಯಿತು.

ಅದೇನೇ ಆದರೂ ಎಲ್ಲರಿಗೂ ಸಮಾನ ಅವಕಾಶಗಳನ್ನು ಕಲ್ಪಿಸುವ ನಿಟ್ಟಿನಲ್ಲಿ ಎಲ್ಲರಿಗೂ ಶಿಕ್ಷಣದ ಅವಕಾಶಗಳನ್ನು ನೀಡುವುದು ಮೊದಲ ಹೆಜ್ಜೆ. ಶಾಲೆಗೆ ನೋಂದಣಿಯಾದವರ ಸಂಖ್ಯೆಯನ್ನು ಗಮನಿಸಿದಲ್ಲಿ ಬಹಳಷ್ಟು ಮಕ್ಕಳು ಶಾಲೆಯನ್ನು ಸೇರುತ್ತಾರೆ, ಆದರೆ ಅಷ್ಟೇ ದೊಡ್ಡ ಪ್ರಮಾಣದಲ್ಲಿ ಮಕ್ಕಳು ಶಾಲೆಯನ್ನು ಬಿಡುತ್ತಿದ್ದು ಅದರಲ್ಲೂ ಮಾಧ್ಯಮಿಕ ಶಾಲೆಗೆ ಬರುವ ವೇಳೆಗೆ ಬಹಳಷ್ಟು ಮಕ್ಕಳು ಶಾಲೆ ಬಿಟ್ಟಿರುತ್ತಾರೆ. ಶಾಲೆ ಬಿಟ್ಟವರಲ್ಲಿ ಕೆಲವರು ಶಾಲೆಗೆ ಬಂದಿದ್ದರೋ ಇಲ್ಲವೋ ಎನ್ನುವುದು ಅಸ್ಪಷ್ಟ. ಎಲ್ಲರಿಗೂ ಶಿಕ್ಷಣ ಮತ್ತು ಸಮಾನ ಅವಕಾಶ ಕಲ್ಪಿಸಬೇಕೆನ್ನುವುದು ಯಶಸ್ವಿಯಾದ ಹಾಗಿಲ್ಲ. ಇದಕ್ಕೆ ಕಾರಣಗಳೇನು ಮತ್ತು ಸಮಾನ ಅವಕಾಶ ಎಂಬ ವಿಷಯದ ಪರಿಣಾಮಗಳೇನು ಎಂದು ಆಲೋಚಿಸಬೇಕು.

ಶ್ರೇಣೀಕೃತ ಸಮಾಜದಲ್ಲಿ ವ್ಯವಸ್ಥಿತ ಶಿಕ್ಷಣವನ್ನು ಎಲ್ಲರಿಗೂ ಸಮಾನವಾಗಿ ನೀಡಬೇಕೆಂದಿದ್ದಲ್ಲಿ ಅದಕ್ಕೆ ತಕ್ಕ ಅವಕಾಶಗಳಿಲ್ಲದ ಮನೆಗಳಲ್ಲಿ ಔಪಚಾರಿಕ ಮಾದರಿಯಾಚೆಗೆ ನೆರವು ಮತ್ತು ಅವಕಾಶಗಳನ್ನು ನೀಡಬೇಕಾಗುತ್ತದೆ. ಶಾಲೆಗೆ ಬರುವ ಪ್ರತಿಯೊಬ್ಬರನ್ನೂ ಮುಕ್ತವಾಗಿ ಸ್ವಾಗತಿಸುವ ಹಾಗೂ ನಿರಾತಂಕವಾಗಿರುವಂತಹ ವಾತಾವರಣವಿರಬೇಕು. ಅವರ ಅನುಭವ ಹಾಗೂ ಅವಶ್ಯಕತೆಗಳಿಗೆ ತಕ್ಕುದಾಗಿಸಬೇಕು. ಈ ಹಿನ್ನಲೆಯಲ್ಲಿ ಏಳುವ ಪ್ರಶ್ನೆ - ನಾವಿದನ್ನು ಮಾಡುತ್ತಿದ್ದೇವೆಯೇ? ಪ್ರಜಾಪ್ರಭುತ್ವದತ್ತ ಸಾಗುವ ಹಾದಿಯಲ್ಲಿ ಸಮಾನ ಶಿಕ್ಷಣ ಆಧಾರಸ್ತಂಭವಿದ್ದಂತೆ ಎಂದು ಅರಿತಲ್ಲಿ ಶಿಕ್ಷಣ ವ್ಯವಸ್ಥೆಯ ಕಾರ್ಯವೈಖರಿ ಮತ್ತು ಅದು ರೂಪಿಸಿದ ನೀತಿಗಳನ್ನು ತಿಳಿಯಬೇಕು.

ಶಿಕ್ಷಣ ಅಸಮಾನತೆಯ ಒಂದು ಕಾರಣವೆಂದರೆ ಪ್ರತಿ ಮಗುವಿನ ಶಿಕ್ಷಣಕ್ಕೆ ತಗಲುವ ವೆಚ್ಚ. ಅಗತ್ಯವಾದ ಎಲ್ಲ ಸವಲತ್ತುಗಳನ್ನುಳ್ಳ ಮಕ್ಕಳಿಂದ ಹಿಡಿದು ಶಾಲೆಗೆ ಕಳಿಸುವುದೇ ಪೋಷಕರಿಗೆ ದೊಡ್ಡ ಹೊರೆಯೆನಿಸುವಂತಹ ಮಕ್ಕಳವರೆಗೆ ಈ ವೆಚ್ಚದ ಪ್ರಭಾವಳಿಯಿದೆ. ಶ್ರೇಣೀಕೃತ ಸರ್ಕಾರಿ ವ್ಯವಸ್ಥೆಯಿಂದಾಗಿ ಈ ಅಂತರವು ಹೆಚ್ಚಿದೆ.

ಶಾಲೆಗಳನ್ನು ಪಬ್ಲಿಕ್ ಪರೀಕ್ಷೆಗಳಲ್ಲಿ ಗಳಿಸಿದ ಅಂಕಗಳು, ಅರ್ಹತಾ ಪಟ್ಟಿಗಳ ಆಧಾರದ ಮೇಲೆ ಅಳೆಯಲಾಗುತ್ತದೆಯೇ ಹೊರತು ಆ ಶಾಲೆಯಲ್ಲಿನ ಭ್ರಾತೃತ್ವ ಮತ್ತು ಆತ್ಮ ವಿಕಸನದ ಮೌಲ್ಯಗಳ ಆಧಾರದ ಮೇಲೆ ಅಲ್ಲ. ಶಾಲೆಗಳಲ್ಲಿ ಈ ಮೌಲ್ಯಗಳನ್ನು ಬಿತ್ತಲಾಗುತ್ತಿದೆಯೇ ಇಲ್ಲವೇ ಎನ್ನುವುದನ್ನು ಯಾವುದೇ ವಿಧಾನದಿಂದಲೂ ತಿಳಿಯುತ್ತಿಲ್ಲ. ಇದರೊಂದಿಗೆ ಒಳಗೊಳ್ಳುವಿಕೆ ಮತ್ತು ಉಳಿಸಿಕೊಳ್ಳುವಿಕೆಯ ತತ್ವಕ್ಕೆ ವಿರುದ್ಧವಾಗಿ ಹೆಚ್ಚಿನ ಸ್ಪರ್ಧೆಗಾಗಿ ಕೆಲವರನ್ನಷ್ಟೇ ಉಳಿಸಿಕೊಳ್ಳುವುದಕ್ಕೆ ಕೂಗಾಟಗಳು ನಡೆಯುತ್ತಿವೆ. ಹಿನ್ನಲೆ ಮತ್ತು ಅವಕಾಶಗಳಲ್ಲಿನ ವ್ಯತ್ಯಾಸವನ್ನು ಕಡೆಗಣಿಸಿ ಹೆಚ್ಚು ಅಂಕಗಳು ಮತ್ತು ತುಲನಾತ್ಮಕ ಸಾಧನೆಯ ಬಗ್ಗೆ ಹೆಚ್ಚು ಒತ್ತು ನೀಡಲಾಗುತ್ತದೆ. ಇದರಿಂದಾಗಿ ಹೆಚ್ಚಿನ ನೆರವಿನ ಅಗತ್ಯವುಳ್ಳವರು ವ್ಯವಸ್ಥೆಯಿಂದ ವೇಗವಾಗಿ ಹೊರದೂಡಲ್ಪಡುತ್ತಾರೆ. ಅವಕಾಶವಂಚಿತರು ಹಾಗೂ ಹೆಸರಿಲ್ಲದವರು ಯಶಸ್ವಿಯಾದರೂ ಹೆಚ್ಚಿನ ಪೂರ್ವಗ್ರಹ ಹಾಗೂ ವಿರೋಧವನ್ನು ಅನುಭವಿಸಬೇಕಾಗುತ್ತದೆ ಎಂಬುದು ಈ ಹಿಂದೆ ಐಐಟಿ ಹಾಗೂ ಐಎಎಸ್ ಅಭ್ಯರ್ಥಿಗಳ ಪ್ರವೇಶಾತಿ ಸಂದರ್ಭದಲ್ಲಿ ನಡೆದ ಘಟನೆಗಳು ಸಮರ್ಥಿಸುತ್ತವೆ.

ಅವಕಾಶವಂಚಿತ ಮಕ್ಕಳಿಗಾಗಿ ಸಂಪನ್ಮೂಲಗಳನ್ನು ಹೆಚ್ಚಿಸುವ ಸಲುವಾಗಿ ನಡೆವ ಹೋರಾಟಗಳು ಸೋಲುತ್ತಿವೆ, ಶೈಕ್ಷಣಿಕ ಬಜೆಟ್‌ನಲ್ಲಿ ರೂ.11000 ಕೋಟಿಗಳಷ್ಟನ್ನು ಕಡಿತಗೊಳಿಸಿದ್ದನ್ನು ಈ ಹಿನ್ನಲೆಯಲ್ಲಿ ನೋಡಬಹುದು.

ಪ್ರತಿ ಮಗುವಿನ ವೆಚ್ಚವನ್ನು ರೂ.1500 ರಿಂದ ವಾರ್ಷಿಕ ಈಗಿನ ರೂ.12,200ಕ್ಕೆ[1] ಹೆಚ್ಚಿಸಲಾಗಿದ್ದರೂ ದೇಶದಲ್ಲಿನ ಪ್ರತಿಷ್ಟಿತ ಖಾಸಗಿ ಶಾಲೆಗಳಲ್ಲಿ[2] ವಾರ್ಷಿಕವಾಗಿ ಪ್ರತಿ ಮಗುವಿಗೆ ತಗಲುವ ವೆಚ್ಚ 12 - 13 ಲಕ್ಷಕ್ಕೆ ಹೋಲಿಸಿದಲ್ಲಿ ಕಡಿಮೆಯೇ.

ಸೌಲಭ್ಯವಂಚಿತ ಮಕ್ಕಳನ್ನು ಶಾಲೆಗಳಲ್ಲಿ ಅವಮಾನಕಾರಿಯಾಗಿ ನಡೆಸಿಕೊಳ್ಳುವ ಕುರಿತು ಸಾಕಷ್ಟು ಬರೆದಾಗಿದೆ. ಮಕ್ಕಳು ಶಾಲೆಗಳಿಂದ ಹೊರಬರುತ್ತಿರುವುದಕ್ಕೆ ಮುಖ್ಯ ಕಾರಣವೇ ಶಾಲೆಗಳಲ್ಲಿ ಸ್ನೇಹಮಯ ವಾತಾವರಣವಿಲ್ಲದಿರುವುದು. ಶಾಲಾ ವ್ಯವಸ್ಥೆಯಲ್ಲಿ, ಸಮಾಜದಲ್ಲಿ ಕೂಡ ಸೌಲಭ್ಯವಂಚಿತ ಹಿನ್ನಲೆಯಿಂದ ಬಂದಂತಹ ಮಕ್ಕಳು ಓದುವುದಿಲ್ಲ ಮತ್ತು ಅದಕ್ಕಾಗಿ ಯಾರೂ ಏನೂ ಮಾಡಲಾಗುವುದಿಲ್ಲ ಎಂದು ಬೇರೂರಿರುವ ನಂಬಿಕೆ. ಪ್ರತಿಯೊಬ್ಬರಿಗೂ ಸಮಾನ ಅವಕಾಶ ಒದಗಿಸಬೇಕು ಮತ್ತು ಎಲ್ಲ ಮಕ್ಕಳೂ ಯಾವುದೇ ಹುದ್ದೆಯನ್ನಾದರೂ ಪಡೆಯಬಲ್ಲರು ಎನ್ನುವ

ಸಾಂವಿಧಾನಿಕ ಬದ್ಧತೆಯನ್ನು ಒಪ್ಪಿಕೊಳ್ಳಲು ಹಿಂಜರಿಕೆಯಿದೆ. ಶಿಕ್ಷಣ, ಆರ್ಥಿಕ, ಆಡಳಿತ ವಲಯಗಳಲ್ಲಿನ ಅಲಿಖಿತ ಒಪ್ಪಂದವೇನೆಂದರೆ ಈ ವಲಯಗಳ ಹುದ್ದೆಗಳು ಮಧ್ಯಮ ಮತ್ತು ಮೇಲ್ವರ್ಗಗಳಿಗೆ ಮಾತ್ರ ಮೀಸಲಾದದ್ದು. ಸೌಲಭ್ಯವಂಚಿತ ಮಕ್ಕಳು ಬುದ್ಧಿವಂತರಲ್ಲ, ಅವರಲ್ಲಿ ಆತ್ಮವಿಶ್ವಾಸ ಕಡಿಮೆ ಎನ್ನುವ ಧೋರಣೆಗಳು ಚಾಲ್ತಿಯಲ್ಲಿವೆ. ಹರ್ಷ ಮಂದರ್ ತಮ್ಮ ಇತ್ತೀಚಿನ 'ಲುಕಿಂಗ್ ಅವೇ' ಪುಸ್ತಕದಲ್ಲಿ ಈ ರೀತಿಯ ನಂಬಿಕೆಗಳು ಮತ್ತು ಧೋರಣೆಗಳನ್ನು ವಿವರವಾಗಿ ಚರ್ಚಿಸುತ್ತಾರೆ. ಸೌಲಭ್ಯವಂಚಿತ ಮಕ್ಕಳ ಕಲಿಕೆಯ ಸಾಮರ್ಥ್ಯ ಕುರಿತಾದ ಅವಜ್ಞೆಗೆ ಅದಕ್ಕೆ ಜವಾಬ್ದಾರರಾದವರ ಅಸಡ್ಡೆಯೇ ಕಾರಣ ಎಂದು ಅಧ್ಯಯನಗಳು ತೋರಿಸಿಕೊಟ್ಟಿವೆ. ಅಸಮಾನ ಶಿಕ್ಷಣವೆನ್ನುವ ಅಪರಾಧದ ಹೊಣೆಯನ್ನು ಅದಕ್ಕೆ ಬಲಿಪಶುಗಳಾದವರ ಹೆಗಲಮೇಲೆ ಹೊರಿಸಲಾಗಿದೆ.

ಶಾಲೆಗಳಲ್ಲಿನ ಸಂಕೇತಗಳು ಮತ್ತು ಪದ್ಧತಿಗಳು ಹಿಂದೂ ಸಂಪ್ರದಾಯದ ಮೇಲ್ಜಾತಿಗೆ ಸಂಬಂಧಿಸಿದ್ದಾಗಿರುತ್ತದೆ. ಅವು ವಿದ್ಯಾರ್ಥಿಗಳಲ್ಲಿನ ವೈವಿಧ್ಯವನ್ನು ರೀತಿ ನೀತಿಗಳನ್ನು ಗುರುತಿಸುವುದೂ ಇಲ್ಲ, ತನ್ನೊಳಗೆ ಸೇರಿಸಿಕೊಳ್ಳುವುದೂ ಇಲ್ಲ. ಪಠ್ಯಪುಸ್ತಕಗಳು ಕೂಡ ಓದುವವರು ಮೇಲ್ಜಾತಿಯ, ಆರ್ಥಿಕವಾಗಿ ಸುಸ್ಥಿರವಾಗಿರುವ ಹಿಂದೂ ವಿದ್ಯಾರ್ಥಿ ಎಂದೇ ಪರಿಗಣಿಸಿರುತ್ತದೆ. *ಈದ್*ಮುಸ್ಲಿಂ ಬಾಂಧವರ ಹಬ್ಬವೆಂದು ವರ್ಣಿಸಿದರೆ, ದೀಪಾವಳಿ ರಾಷ್ಟ್ರದ ಹಬ್ಬವೆಂದು ವರ್ಣಿಸಿರುತ್ತಾರೆ. *'ಆತ ಬಡವನಾದರೂ ಪ್ರಾಮಾಣಿಕ', 'ರೀಟಾಳ ತಂದೆ ಬಡವರು. ಅವರ ಬಳಿ ಸ್ಕೂಟರ್ ಮಾತ್ರ ಇತ್ತು. ಕಾರು ಇರಲಿಲ್ಲ' ಅಥವ 'ಬುಡಕಟ್ಟು ಮಂದಿ ಕಾಡಿನಲ್ಲಿ ವಾಸಿಸುತ್ತಾರೆ'* - ಈ ರೀತಿಯ ಹೇಳಿಕೆಗಳಿ**ಂದ ತುಂಬಿವೆ**. ಈ ಸಂಕೇತಗಳು, ಸಂಪ್ರದಾಯಗಳು ಮತ್ತು ವಿವರಣೆಗಳು ಹಲವು ಮಕ್ಕಳನ್ನು ಈ ವಲಯದಿಂದ ದೂರವಿಡುತ್ತವೆ. ಶಿಕ್ಷಕರಿಗೆ ಸಂವಿಧಾನದಲ್ಲಿ ಹೇಳಲಾಗಿರುವ ತತ್ವಗಳ ಕುರಿತು ತರಬೇತಿ ನೀಡಿರುವುದಿಲ್ಲ**ವಾದ್ದರಿಂದ** ಅವರು ಈ ಸಂಕೇತಗಳನ್ನು ಎದುರಿಸಲು ಸಮರ್ಥರಾಗಿರುವುದಿಲ್ಲ.

ಶ್ರೀಮಂತ ಮನೆಗಳಲ್ಲಿ ಇಲ್ಲವೇ ಬೋರ್ಡ್‌ರೂಂಗಳಲ್ಲಿ ಕುಳಿತು ಬಡವರು ಮತ್ತು ಅಲ್ಪಸಂಖ್ಯಾತರ ಬಗೆಗೆ ಮಾತಾಡುವ ಮಂದಿ ವಾಸ್ತವದಲ್ಲಿ ಅವರ ಪರವಾಗಿ ದನಿಯೆತ್ತಿ ಮಾತಾಡುವುದಿಲ್ಲ ಎನ್ನುವ ವೈರುಧ್ಯವನ್ನು ಗಮನಿಸಬೇಕು. ಶ್ರೀಮಂತ ಮತ್ತು ಮಧ್ಯಮ ವರ್ಗದ ಮಕ್ಕಳನ್ನು ಹೊಂದಿರುವ ಶಾಲೆಗೆ ಸೌಲಭ್ಯವಂಚಿತ ಹಿನ್ನಲೆಯ ಮಕ್ಕಳು ಬಂದು ಸೇರಿದಲ್ಲಿ ಪ್ರತಿರೋಧದ ದನಿ ಏಳುವುದು ಅಚ್ಚರಿಯ ವಿಷಯವೇನಲ್ಲ. ಈ ಮಕ್ಕಳು ತಮ್ಮ ಮಕ್ಕಳಿಗಿಂತ ಭಿನ್ನ. ಅವರಿಗೆ ಸಾಧಿಸುವ ಇಚ್ಛೆಯಾಗಲಿ, ಗುರಿಯಾಗಲಿ ಇಲ್ಲ. ಅವರ ನಂಬಿಕೆಗಳು ಬೇರೆ. ಹಾಗಾಗಿ ಅವರೊಂದಿಗೆ ಬೆರೆತರೆ ನಮ್ಮ ಮಕ್ಕಳು 'ಹಾಳಾಗುತ್ತಾರೆ' ಎನ್ನುವ ವಾದವನ್ನು ಮುಂದುಮಾಡುತ್ತಾರೆ. ಈ ರೀತಿಯ ಒತ್ತಡ ಕೇವಲ ಖಾಸಗಿ ಶಾಲೆಗಳಿಗೆ ಮಾತ್ರವಲ್ಲ ಸರ್ಕಾರಿ ಶಾಲೆಗಳೂ ಇದನ್ನು ಎದುರಿಸಬೇಕಾಗುತ್ತದೆ.

ಸಾಮಾನ್ಯ ಸರ್ಕಾರಿ ಶಾಲೆಗಳು ಯಾವುದೇ ಮಗುವನ್ನು ದಾಖಲಿಸಿಕೊಳ್ಳದೆ ಇರುವಂತಿಲ್ಲ. ಈಗ ಕೆಳಮಧ್ಯಮ ವರ್ಗದವರು ಕೂಡ ಇದರಿಂದ ದೂರವಿರತೊಡಗಿದ್ದಾರೆ. ಆದ್ದರಿಂದ ಸೌಲಭ್ಯವಂಚಿತ ಮಕ್ಕಳನ್ನು ಭಾಗವಹಿಸುವಿಕೆಯಿಂದ ದೂರ ಇಡುವಂತಹ ಒತ್ತಡವನ್ನು ಶಾಲೆಗಳು ಎದುರಿಸುವಂತಾಗಿರುವುದು ಅಚ್ಚರಿಯಲ್ಲ. ಖಾಸಗಿ ಶಾಲೆಗಳು ತಮ್ಮ ಗಿರಾಕಿಗಳಿಗೆ ತಕ್ಕಂತೆ ಶುಲ್ಕವನ್ನು ನಿಗದಿಪಡಿಸಿದ್ದು ಅಲ್ಲಿ ಶ್ರೇಣೀಕರಣ ಇನ್ನೂ ಢಾಳಾಗಿರುತ್ತದೆ. ಈ ರೀತಿಯ ಶೈಕ್ಷಣಿಕ ಅವಕಾಶಗಳ ಶ್ರೇಣೀಕರಣಕ್ಕೆ ಸವಾಲೊಡ್ಡುವ ಒಂದು ವಿಧಾನವೆಂದರೆ ಸಮಾನ ಶಾಲಾವ್ಯವಸ್ಥೆಯನ್ನು ಜಾರಿಗೊಳಿಸುವುದು. ಈ ನಡೆಯು ಭಾರತವು ಗಣರಾಜ್ಯವಾದಾಗ ಸುಲಭವಾಗಿ ಮಾಡಬಹುದಾಗಿತ್ತು. ಈ ಹಂತದಲ್ಲಿ ಸಾಮಾಜಿಕ ಹಾಗೂ ರಾಜಕೀಯ ಬಲ ಹೊಂದಿರುವ ಮೇಲ್ವರ್ಗದ ಜನರು ಸಮಾನ ವ್ಯವಸ್ಥೆಯನ್ನು ಒಪ್ಪುವುದು ಕಷ್ಟ. ನಾವು ಈಗಾಗಲೇ ಅಂತರಾಷ್ಟ್ರೀಯ ಮಟ್ಟಕ್ಕೆ ಹೋಲಿಸಿ ನೋಡುವ ಒತ್ತಡವನ್ನು ಗ್ರಾಮೀಣ ಶಾಲೆಗಳಲ್ಲಿ ಕೂಡ ಕಾಣುತ್ತಿದ್ದೇವೆ. ಹೀಗಾಗಿ ಸರ್ಕಾರಿ ಶಾಲೆಗಳೆಂದರೆ ಸೌಲಭ್ಯವಂಚಿತ ಮಕ್ಕಳು ಮತ್ತು ಹೊರಗುಳಿದ ಸಮುದಾಯಗಳ ಮಕ್ಕಳಿಗೆ ಮಾತ್ರ ಎನ್ನುವಂತಾಗಿದೆ. ಇವುಗಳ ಸಂಪನ್ಮೂಲಗಳು ಕಡಿಮೆ, ಇವುಗಳತ್ತ ನೀಡುವ ಗಮನ ಕಡಿಮೆಯಾಗಿದ್ದು ಹೆಚ್ಚಿನ ಮಹತ್ವಾಕಾಂಕ್ಷೆಯ ಶಿಕ್ಷಣವನ್ನು ನೀಡಲಾಗದೆ ಇಲ್ಲಿನ ಮಕ್ಕಳು ಅಸಮಾನತೆಯಲ್ಲೇ ಇರುವಂತಾಗಿದೆ.

ವ್ಯವಸ್ಥೆಯ ಮತ್ತೊಂದು ಬಹುಮುಖ್ಯ ಸಂಗತಿಯೆಂದರೆ ಮಕ್ಕಳ ಕಲಿಕೆ, ಶ್ರೇಣೀಕರಣದ ವಿಶ್ಲೇಷಣೆ ಮತ್ತು ಕಲಿಕೆಯ ಅಸಮರ್ಥತೆಯನ್ನು ಕುರಿತ ವ್ಯವಸ್ಥೆಯ ಧೋರಣೆ. ಶಾಲೆಗಳ ಕಾರ್ಯನಿರ್ವಹಣೆಗೆ ನೆರವು ನೀಡುವವರು, ಅದರೊಂದಿಗೆ ಕೆಲಸ ಮಾಡುವವರು ನಂಬಿರುವಂತೆ ಶಾಲೆ ಮತ್ತು ಮಕ್ಕಳೊಡನೆ ಒಡನಾಡುವವರು, ಶಿಕ್ಷಕರನ್ನೂ ಒಳಗೊಂಡಂತೆ ಅಸಮರ್ಥರು ಹಾಗೂ ಕೆಲಸ ಮಾಡಲು ಇಚ್ಛಿಸುವುದಿಲ್ಲ. ಆದ್ದರಿಂದ ಶಿಕ್ಷಕರಿಗೆ ಹೊಸ ರೀತಿಯ ಸೂಚನೆಗಳನ್ನು ನಿರಂತರವಾಗಿ ನೀಡುತ್ತಾ ಅವುಗಳನ್ನು ಅವರ ಮೇಲೆ ಹೇರಲಾಗುತ್ತದೆ. ಅವರಿಗೆ ಯಾವುದೇ ರೀತಿಯ ಸ್ವಾತಂತ್ರ್ಯವನ್ನು ನೀಡುವುದಿಲ್ಲ. ಏಕರೂಪದ ಸೂಚನೆಗಳನ್ನು ಪಾಲಿಸುವ ಶಿಕ್ಷಕರು ಮತ್ತು ಮಕ್ಕಳು ವೈವಿಧ್ಯತೆಯನ್ನು ಕಡೆಗಣಿಸುತ್ತಾರೆ. ಶಿಕ್ಷಕಗರಿಗಾಲಿ ಅಥವ ಶಾಲೆಗಾಗಲಿ ತಮ್ಮ ದಾರಿಯನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶ ಇಲ್ಲದಿರುವಾಗ ಶಿಕ್ಷಣ ವ್ಯವಸ್ಥೆಯ ಅಧಿಕಾರಿಗಳು ಅಥವ ಆಡಳಿತಗಾರರು ಕಲಿಯದೆ ಉಳಿಯುವವರ ಹೊಣೆಯನ್ನು ಶಿಕ್ಷಕರು, ಪೋಷಕರು ಅಂತಿಮವಾಗಿ ಮಗುವಿನ ಮೇಲೆ ಹೊರಿಸುತ್ತಾರೆ. ಯಾವುದೇ ರೀತಿಯ ವಿಶೇಷ ಬೆಂಬಲ ನೀಡದೇ ಅಥವಾ ದಾರಿಯನ್ನು ಒದಗಿಸದೆ ಪ್ರತಿಯೊಬ್ಬರೂ ನಿಗದಿ ಪಡಿಸಿದ ಸಮಯದೊಳಗೇ ಕಲಿಯಬೇಕು ಎನ್ನುವ ನಿರೀಕ್ಷೆಯಿಂದಾಗಿ ಶಿಕ್ಷಕರು ಮತ್ತು ಮಕ್ಕಳು ಇಬ್ಬರೂ ಅನಗತ್ಯ ಒತ್ತಡಕ್ಕೆ ಒಳಗಾಗುತ್ತಾರೆ. ಸಾಮಾನ್ಯವಾಗಿ, ಮಕ್ಕಳ ಕಲಿಕಾ ಸಾಮರ್ಥ್ಯ ಕುರಿತಾಗಿ ಶಿಕ್ಷಕರ ನಂಬಿಕೆಗಳು ಮತ್ತು

ಧೋರಣೆಗಳು ಕೂಡ ಮಕ್ಕಳಡೆಗಿನ ಸಂವೇದನೆಯಿಂದ ಕೂಡಿಲ್ಲ. ಜೊತೆಗೆ ಕೆಲವು ಶಿಕ್ಷಕರು ಸಮಾನತೆ ಪ್ರತಿ ಮಗುವಿನ ಸಾಂವಿಧಾನಿಕ ಹಕ್ಕು ಎನ್ನುವ ಸಂಕಲ್ಪಕ್ಕೆ ಬದ್ಧರಾಗಿರುವುದಿಲ್ಲ.

ವಿವಿಧ ಸಮುದಾಯಗಳಲ್ಲಿ ಶಿಕ್ಷಣದ ಉದ್ದೇಶವನ್ನು ಬೇರೆ ಬೇರೆ ರೀತಿಯಲ್ಲಿ ಅರ್ಥೈಸಿಕೊಳ್ಳಲಾಗುತ್ತದೆ. ಪೀಠಿಕೆಯಲ್ಲಿ ಉದ್ದೇಶವನ್ನು ಈ ರೀತಿ ವಿವರಿಸಲಾಗಿದೆ - ಶಿಕ್ಷಣದಲ್ಲಿ ಸಮಾನ ಅವಕಾಶ ಮತ್ತು ಪ್ರಜಾಪ್ರಭುತ್ವವನ್ನು ಅರ್ಥಮಾಡಿಕೊಳ್ಳುವುದು. ಆ ಮೂಲಕ ನ್ಯಾಯ, ಸ್ವಾತಂತ್ರ್ಯ ಮತ್ತು ಭ್ರಾತೃತ್ವದ ಬಗ್ಗೆ ತಿಳಿಯುವುದು. ಇದರಿಂದ ಪ್ರಜೆಗಳು ನ್ಯಾಯಕ್ಕಾಗಿ ಬೇಡಿಕೆ ಸಲ್ಲಿಸಬಹುದು ಮತ್ತು ಮತ್ತೊಬ್ಬರ ಹಕ್ಕುಗಳನ್ನು ಗೌರವಿಸುತ್ತಲೇ ತಮ್ಮದನ್ನು ಕಾಪಾಡಿಕೊಳ್ಳಬಹುದು. ಪೀಠಿಕೆಯಲ್ಲಿ ಹೇಳಿರುವಂತಹ ಶಿಕ್ಷಣವು ವಿಶ್ವಾತ್ಮಕವಾಗಿದ್ದು, ಎಲ್ಲವನ್ನೂ ಒಳಗೊಳ್ಳುವ ಮತ್ತು ತನ್ನೊಳಗೆ ಅಳವಡಿಸಿಕೊಳ್ಳುವ ಕಾರ್ಯಕ್ರಮ. ಇದನ್ನು ಗುರುತಿಸಿಕೊಳ್ಳುವುದು ಅತ್ಯವಶ್ಯಕ. ಇಲ್ಲದೇ ಹೋದಲ್ಲಿ ಆದ್ಯತೆಗಳು ಬದಲಾಗಿಬಿಡಬಹುದು.

ಶಿಕ್ಷಣದ ಉದ್ದೇಶವನ್ನು ಈ ರೀತಿಯಲ್ಲಿ ನೋಡಬಹುದು :
ಅ) ವ್ಯವಸ್ಥೆಯನ್ನು ಕಾಪಾಡಲು ಮತ್ತು ನಿರ್ವಹಿಸಲು
ಆ) ವ್ಯಕ್ತಿಗಳ ಆರ್ಥಿಕ ಬೆಳವಣಿಗೆಗಾಗಿ ಮತ್ತು ಸಂಪನ್ಮೂಲಗಳ ಸೂಕ್ತಬಳಕೆಗಾಗಿ
ಇ) ಸಧೃಡ ದೇಶ ನಿರ್ಮಾಣ ಮತ್ತು ಸಧೃಡ ಆರ್ಥಿಕತೆಯು ಪ್ರಜೆಗಳ ಬದುಕನ್ನು ಉತ್ತಮಗೊಳಿಸುತ್ತದೆ
ಈ) ಮಾನವೀಯ ಸಮಾಜ ನಿರ್ಮಾಣ

ಇವೆಲ್ಲವೂ ಆಳವಾದ ಚಿಂತನೆ ಮತ್ತು ವಿಭಿನ್ನ ರೀತಿಯ ವಿಶ್ಲೇಷಣೆಯನ್ನು ಬೇಡುತ್ತದೆ.

ತೊಂಬತ್ತರ ದಶಕದ ನಂತರ ಮತ್ತು 21ನೇ ಶತಮಾನದ ಆರಂಭಿಕ ವರ್ಷಗಳಲ್ಲಿ ಸರ್ಕಾರಿ ಶಾಲಾ ವ್ಯವಸ್ಥೆಯನ್ನು ಮಕ್ಕಳಿಗೆ ವಿಶ್ವಾತ್ಮಕವಾದ ಹಾಗೂ ಗುಣಮಟ್ಟದ ಶಿಕ್ಷಣವನ್ನು ನೀಡುವ ಸಲುವಾಗಿ ಪುನಶ್ಚೇತನಗೊಳಿಸುವ ಕುರಿತು ಸಾಕಷ್ಟು ಚರ್ಚೆಗಳಾದವು. ಶಾಲಾ ಶಿಕ್ಷಣವು ಉತ್ತಮ ಕಾರ್ಮಿಕ ಶಕ್ತಿಯನ್ನು ಸೃಷ್ಟಿಸಬೇಕು ಇದರಿಂದ ವ್ಯಕ್ತಿಗೆ ಮತ್ತು ದೇಶಕ್ಕೆ ಅನುಕೂಲವಾಗುತ್ತದೆ ಎನ್ನುವ ನಂಬಿಕೆಯೊಂದಿಗೆ ಈ ನಿಟ್ಟಿನಲ್ಲಿ ಪರಿಶ್ರಮವಹಿಸಲಾಯಿತು. ರಾಜ್ಯವೊಂದರ ಪ್ರಾಮಾಣಿಕ ಹಾಗೂ ಕಾಳಜಿಯುಳ್ಳ ಯೋಜನಾ ನಿರ್ದೇಶಕರೊಬ್ಬರ ಮಾತುಗಳಿವು : 'ನನ್ನ ದೃಷ್ಟಿಯಲ್ಲಿ *ಸುಶಿಕ್ಷಿತ* ಸಮಾಜದ ವ್ಯವಸ್ಥೆ *ಇದ್ದಲ್ಲಿ* ಅದೊಂದು ಸಧೃಡ ದೇಶವನ್ನು ಕಟ್ಟುತ್ತದೆ ಹಾಗೂ ಆ ದೇಶವು ಯಾವುದೇ ರೀತಿಯ ಸಮಸ್ಯೆಗಳನ್ನು ಎದುರಿಸುವುದಿಲ್ಲ. ಸಾಮಾಜಿಕ ಸಮಸ್ಯೆಗಳು ಕೂಡ ಕಡಿಮೆಯಾಗುತ್ತವೆ. ಶಿಕ್ಷಿತರಿಗೆ ತರಬೇತಿ ನೀಡಿದಾಗ ಅವರು ಹೆಚ್ಚು ಉತ್ಪಾದಕ ರೀತಿಯಲ್ಲಿ ಕೆಲಸ ಮಾಡುತ್ತಾರೆ. ಇದರಿಂದ ದೇಶವು ಶಕ್ತಿ ಕೇಂದ್ರವಾಗಿ ರೂಪುಗೊಳ್ಳುತ್ತದೆ. ಒಮ್ಮೆ ಅವರು

*ಆರ್ಥಿಕ*ವಾಗಿ ಸ್ವತಂತ್ರರಾದಲ್ಲಿ ರಾಜ್ಯದ ಆದಾಯವು ಹೆಚ್ಚಿ *ಆರ್ಥಿ*ಕವಾಗಿ ಮುಂದುವರೆಯುತ್ತದೆ. ನಮ್ಮಲ್ಲಿ ಹೆಚ್ಚಿನ ಜನಸಂಖ್ಯೆಯಿದೆ. ಹೆಚ್ಚಿನವರು ೧೮-೪೫ *ವರ್ಷ*ದ ಒಳಗಿನವರು. ಇದು ಹೆಚ್ಚು ಉತ್ಪಾದಕ ವಯಸ್ಸು ಹಾಗೂ ಜನರು ಹೆಚ್ಚು ಶ್ರಮವಹಿಸಿ ಕೆಲಸಮಾಡಬಲ್ಲರು. ಇವರೆಲ್ಲರೂ ಶಿಕ್ಷಿತರಾದಲ್ಲಿ ಅವರಿಗೆ ತರಬೇತಿ ನೀಡಿ ಹೆಚ್ಚು ಪ್ರಯೋಜನಕಾರಿ ಕೆಲಸಗಳನ್ನು ಮಾಡುವಂತೆ ಮಾಡಬಹುದು". ಈ ಹೇಳಿಕೆಯು ಶಿಕ್ಷಣದ ಬಗ್ಗೆ ಬಹಳ ಇತ್ಯಾತ್ಮಕವಾಗಿ ಮಾತಾಡುತ್ತದೆ, ಆದರೆ ತಮ್ಮ ಪ್ರಸ್ತುತ ಸಂ*ದರ್ಭ*ಗಳನ್ನು ಬದಲಾಯಿಸಿಕೊಳ್ಳಲು ಇರುವ ಆಯ್ಕೆಗಳನ್ನು ತಿಳಿಯುವ ಪ್ರಕ್ರಿಯೆಯಲ್ಲಿ ಜನರೂ ಒಂದು ಭಾಗವಾಗಬೇಕು ಎನ್ನುವುದು ಒಳಗೊಂಡಿಲ್ಲ.

ಅಂತಿಮವಾಗಿ ನಾವು ಪೀಠಿಕೆಯಲ್ಲಿ ಸಮಾನ ಸಮಾಜದ ನಿರ್ಮಾಣಕ್ಕೆ ಸೂಚಿಸಲಾಗಿರುವ ನಿರ್ದೇಶಕ ತತ್ವಗಳಿಂದ ವಿಮುಖರಾಗಿ ಆರ್ಥಿಕ ಪ್ರಗತಿ ಹಾಗೂ ಅಡಿಯಾಳುಗಳಾಗಿರುವುದಕ್ಕೆ ಒತ್ತುನೀಡಿದ್ದೇವೆ. ಬಹುತೇಕರನ್ನು ಮತ್ತೊಬ್ಬರ ಸೇವೆಗೆ ಸಿದ್ಧಗೊಳಿಸುತ್ತಿದ್ದೇವೆಯೇ ಹೊರತು ಸಮಾಜದಲ್ಲಿನ ಕಂದಕಗಳನ್ನು ಮುಚ್ಚುವತ್ತ ಗಮನಹರಿಸುತ್ತಿಲ್ಲ. ಮಕ್ಕಳನ್ನು ಕುಟುಂಬದ ಕೆಲಸದ ಬಲೆಯೊಳಗೆ ಸಿಲುಕಿಸಿ ಅವರು ದೇಶಕ್ಕಾಗಿ ಹೆಚ್ಚು ಉತ್ಪಾದಿಸುವಂತೆ ಮಾಡುವ ಕುರಿತು ಸಂವಾದ ನಡೆಯುತ್ತಿದೆ. ಬಾಲ್ಯದ ಕಲ್ಪನೆ, ಕನಸಿನ ಆಯ್ಕೆ ಮತ್ತು ಅದನ್ನು ನನಸಾಗಿಸಿಕೊಳ್ಳುವುದೆಲ್ಲವೂ 'ಅರ್ಹತೆ' ಹೊಂದಿರುವವರಿಗೆ ಮಾತ್ರ ಎಂದು ತಿಳಿಯಲಾಗುತ್ತಿದೆ.

ಶೈಕ್ಷಣಿಕ ಪ್ರಕ್ರಿಯೆ ಮತ್ತು ವೈವಿಧ್ಯಮಯ ಮಕ್ಕಳ ಸಮಾನ ಒಳಗೊಳ್ಳುವಿಕೆಯ ನಡುವಣ ಸಂಬಂಧದಲ್ಲಿ ಹಲವು ನಿರ್ಣಾಯಕ ಅಂಶಗಳನ್ನು ಗಮನಿಸಬೇಕಿದೆ. ಜ್ಞಾನದ ಸ್ವರೂಪ ಮತ್ತು ಅದನ್ನು ತರಗತಿ ಹಾಗೂ ಶಾಲೆಗಳಲ್ಲಿ ಹೇಗೆ ನಿರ್ವಹಿಸಲಾಗುತ್ತಿದೆ ಎನ್ನುವುದರೊಂದಿಗೆ ಸಂಬಂಧ ಹೊಂದಿದೆ. ಇದು ಶೈಕ್ಷಣಿಕ ಅನುಭವಗಳ ಸ್ವರೂಪದೊಂದಿಗೂ ಸಂಬಂಧ ಹೊಂದಿದೆ. ಅವುಗಳಲ್ಲಿ ಕೆಲವು ನಿರ್ಣಾಯಕ ಅಂಶಗಳನಷ್ಟೇ ಇಲ್ಲಿ ಹೇಳಲಾಗಿದೆ. ಇದು ಹಲವು ಹಂತಗಳನ್ನು ಒಳಗೊಂಡಿದ್ದು ಇವೆಲ್ಲವೂ ವೈವಿಧ್ಯತೆ ಮತ್ತು ಸಮಾನತೆಯನ್ನು ಉಂಟುಮಾಡುವುದೆಂಬ ನಂಬಿಕೆಗಳು ಮತ್ತು ಅಭಿಪ್ರಾಯಗಳನ್ನು ಆಧರಿಸಿದೆ.

ಪರಾಮರ್ಶನ ಲೇಖನ/ಗ್ರಂಥಗಳು: (ಉಲ್ಲೇಖಗಳು)


1. How much does India spend on Elementary Education? Accountability Initiative Postedon: 04-12-14 Ambrish Dongre, Avani Kapur
2. Nayantara Nath, Per child funding formula, June 2014 CCS internship files. Wordpress.com/ 2014/06/315
3. Anurag Behar, Cost of privatized education, Mint, 17 June 2015

4. Report of the International Conference on Teacher Development and Management held in Udaipur, 23-25 February, 2009
5. Report of DPEP in Karnataka (Unpublished), *Understanding Pedagogical Interventions*, *2002*, Principal Investigator, H.K. Dewan, Vidya Bhawan Society
6. http://www.ecolemondiale.org/fee-structure/ The fees structure of a typical good quality IB school